## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 806
ಮಾನ್ಯ ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 20-12-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

* * *

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಆರೋಗ್ಯ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರಿಗೆ ಯಾವ ಯಾವ ಸೌಲಭ್ಯಗಳನ್ನು ಸರ್ಕಾರ ನೀಡುತ್ತಿದೆ; (ಸಂಪೂರ್ಣ ವಿವರ ನೀಡುವುದು) | ಸರ್ಕಾರವು ಗುತ್ತಿಗೆ/ಹೊರಗುತ್ತಿಗೆ ನೌಕರರಿಗೆ ವೇತನದೊಂದಿಗೆ ಪಿ.ಎಫ್. ಹಾಗೂ ಇ.ಎಸ್.ಐ. ಅನ್ನು ನಿಯಮಾನುಸಾರ ನೀಡಲಾಗುತ್ತಿದೆ ಹಾಗೂ ಎರಡು ತಿಂಗಳಿಗೊಮ್ಮೆ ಹೊರಗುತ್ತಿಗೆ ನೌಕರರಿಗೆ ವೈದ್ಯಕೀಯ ಪರೀಕ್ಷೆ ನಡೆಸಲಾಗುವುದು. ತಿಂಗಳಿಗೊಂದು ಸಾಂಧರ್ಬಿಕ ರಜೆ ನೀಡಲಾಗುವುದು. |
| ಆ | ಆಸ್ಪತ್ರೆಗಳಲ್ಲಿ ಕೋವಿಡ್ ಕೆಲಸ ನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರಿಗೆ ರಿಸ್ಕ್ ಅಲೋಯೆನ್ಸ್ ನೀಡಲಾಗಿದೆಯೇ; ನೀಡದಿದ್ದಲ್ಲಿ ಯಾವ ಕಾಲಮಿತಿಯಲ್ಲಿ ನೀಡಲಾಗುವುದು; (ಸೂಕ್ತ ಮಾಹಿತಿ ನೀಡುವುದು) | ಆಸ್ಪತ್ರೆಗಳಲ್ಲಿ ಕೋವಿಡ್ ಕೆಲಸ ನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರಿಗೆ ಸರ್ಕಾರ ನಿಗಧಿಪಡಿಸಿದ ವೇತನದೊಂದಿಗೆ ಮಾಹೆವಾರು ರಿಸ್ಕ್ ಅಲೋಯೆನ್ಸ್ ಕೂಡ ನೀಡಲಾಗುತ್ತಿದೆ. |
| ಇ | ಆಸ್ಪತ್ರೆಗಳಲ್ಲಿ ಕೆಲಸ ನಿರ್ವಹಿಸುವ ಹೊರಗುತ್ತಿಗೆ ನೌಕರರಿಗೆ ಸೇವಾ ಭದ್ರತೆ ನೀಡದೆ, ಮೇಲಾಧಿಕಾರಿಗಳ ದೌರ್ಜನ್ಯವನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ನೌಕರರಿಗೆ ಆಗುತ್ತಿರುವ ತೊಂದರೆಗಳನ್ನು ಪರಿಹರಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರ ದೌರ್ಜನ್ಯದ ಬಗ್ಗೆ ಯಾವುದೇ ದೂರು ಸ್ವೀಕೃತವಾಗಿರುವುದಿಲ್ಲ. |
| ಈ | ಈ ಹೊರಗುತ್ತಿಗೆ ನೌಕರರಿಗೆ ಪ್ರತಿ ತಿಂಗಳು ಸರಿಯಾದ ಸಮಯಕ್ಕೆ ಸಂಬಳ ನೀಡದಿರುವುದು ಹಾಗೂ ಸಮಾನ ಕೆಲಸಕ್ಕೆ ಸಮಾನ ವೇತನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ತೊಂದರೆಗಳನ್ನು ಸರ್ಕಾರ ಯಾವ ಕಾಲಮಿತಿಯಲ್ಲಿ ಪರಿಹರಿಸಲಾಗುವುದು; (ಸೂಕ್ತ ಮಾಹಿತಿ ನೀಡುವುದು) | ಕಾಲ ಕಾಲಕ್ಕೆ ಗುತ್ತಿಗೆ/ಹೊರಗುತ್ತಿಗೆ ಪಡೆದ ಆಸ್ಪತ್ರೆಗಳಿಗೆ ಅನುದಾನವನ್ನು ನಿಯಮಾನುಸಾರ ಬಿಡುಗಡೆ ಗೊಳಿಸಲಾಗುತ್ತಿರುತ್ತದೆ. ಹೊರಗುತ್ತಿಗೆ ಪಡೆದ ಏಜೆನ್ಸಿಯವರು ಹಿಂದಿನ ತಿಂಗಳು ವೇತನವನ್ನು ಇ.ಸಿ.ಎಸ್. ಮುಖಾಂತರ ಸಂಬಂಧಿಸಿದ ನೌಕರರ ಖಾತೆಗೆ ಹಾಗೂ ಪಿ.ಎಫ್. ಮತ್ತು ಇ.ಎಸ್.ಐ. ಪಾವತಿಸಿದ ವಿವರಗಳನ್ನು ಬಿಲ್ಲಿನೊಂದಿಗೆ ಸಲ್ಲಿಸಿ ಬಿಲ್ಲಿನ ಮೊತ್ತವನ್ನು ಅವರ ಖಾತೆಗೆ ಖಜಾನೆ ಮೂಲಕ ಪಡೆಯುತ್ತಿರುತ್ತಾರೆ.<br><br>ಸರ್ಕಾರವು ಗುತ್ತಿಗೆ/ಹೊರಗುತ್ತಿಗೆ ನೌಕರರಿಗೆ ಮೂಲ ವೇತನ ಹಾಗೂ ವಿ.ಡಿ.ಎ. ಯನ್ನು ಪ್ರತಿ ಆರ್ಥಿಕ ವರ್ಷವಾರು ಹೆಚ್ಚಿಸುತ್ತಿದ್ದು ಅದರಂತೆ ವೇತನ ಪಾವತಿ ಮಾಡಲಾಗುತ್ತಿರುತ್ತದೆ. |

...2

| | | |
|---|---|---|
| ಉ | ಈ ಹೊರಗುತ್ತಿಗೆ ನೌಕರರನ್ನು ಹೊರಗಡೆ ಏಜೆನ್ಸಿ ಮೂಲಕ ಆಯ್ಕೆ ಮಾಡಿಕೊಂಡಿರುವುದರಿಂದ ಸರಿಯಾದ ಸಮಯಕ್ಕೆ ಸಂಬಳವಿಲ್ಲದೆ, ಸೇವಾಭದ್ರತೆ ಇಲ್ಲದೆ ಇದ್ದರೂ ಕೋವಿಡ್ ಸಮಯದಲ್ಲಿ ಕೆಲಸ ನಿರ್ವಹಿಸಿದರೂ ಸಹ ಪರದಾಡುವಂತಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ನೌಕರರನ್ನು ಸರ್ಕಾರಿ ಸಂಸ್ಥೆಯಾದ ಕಿಯೋನಿಕ್ಸ್ ವತಿಯಿಂದಲೇ ಆಯ್ಕೆ ಮಾಡಿಕೊಳ್ಳಬಹುದಲ್ಲವೇ; ಹೊರಗಡೆ ಏಜೆನ್ಸಿಗಳ ಮೂಲಕ ಯಾವ ಕಾರಣಕ್ಕಾಗಿ ಆಯ್ಕೆ ಮಾಡಿಕೊಳ್ಳಬೇಕು; (ಸೂಕ್ತ ಮಾಹಿತಿ ನೀಡುವುದು) | ಹೊರಗುತ್ತಿಗೆ ನೌಕರರನ್ನು ಕರ್ತವ್ಯಕ್ಕೆ ನೇಮಿಸಿಕೊಳ್ಳುವ ಸಂದರ್ಭದಲ್ಲಿ ಖಾಲಿ ಹುದ್ದೆಗೆ ಎದುರಾಗಿ ಸೇವೆಗೆ ಅಗತ್ಯವಿರುವುದನ್ನು ಪರಿಗಣಿಸಿ ಸರ್ಕಾರದ ನಿರ್ದೇಶನದ ಅನ್ವಯ ಟೆಂಡರ್ ಮೂಲಕ ಹೊರಗುತ್ತಿಗೆ ಏಜೆನ್ಸಿಯನ್ನು ನೇಮಕ ಮಾಡಲಾಗುತ್ತದೆ. ಹೊರಗುತ್ತಿಗೆ ನೌಕರರಿಗೆ ಹಾಗೂ ಕೋವಿಡ್-19ರ ಹೊರಗುತ್ತಿಗೆ ನೌಕರರಿಗೆ ಮಾಸಿಕ ವೇತನವನ್ನು ನಿಗದಿತ ಸಮಯದಲ್ಲಿ ಪಾವತಿಸಲಾಗುತ್ತಿದೆ. |
| ಊ | ಹೊರ ಏಜೆನ್ಸಿಗಳ ಮೂಲಕ ಆಯ್ಕೆ ಮಾಡಿಕೊಳ್ಳುವುದನ್ನು ಸಂಪೂರ್ಣವಾಗಿ ನಿಲ್ಲಿಸುವ ಉದ್ದೇಶ ಸರ್ಕಾರಕ್ಕೆ ಇದೆಯೇ; ಇದ್ದಲ್ಲಿ, ಯಾವ ಕಾಲಮಿತಿಯಲ್ಲಿ ಕ್ರಮಕೈಗೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಕೆ.ಟಿ.ಪಿ.ಪಿ. ನಿಯಮಾವಳಿಗಳ ಅನ್ವಯ ಇ-ಟೆಂಡರ್‌ನಲ್ಲಿನ ಷರತ್ತು ಮತ್ತು ನಿಯಮಾವಳನ್ವಯ ಅರ್ಹರಾದ ಏಜೆನ್ಸಿಯವರಿಂದ ಸೇವೆಯನ್ನು ಪಡೆಯಲಾಗುತ್ತದೆ. |

ಸಂಖ್ಯೆ: ಆಕುಕ 806 ಚುರಪ್ರ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು